ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ

**ಕರ್ನಾಟಕ ವಿಧಾನ ಪರಿಷತ್ತು**
ನೂರ ನಲವತ್ತೊಂದನೆಯ ಅಧಿವೇಶನ
ಶುಕ್ರವಾರ, ದಿನಾಂಕ: 25ನೇ ಸೆಪ್ಟೆಂಬರ್, 2020

ಕಳಪೆ ಆಹಾರ ಪೂರೈಕೆ ಕುರಿತು

ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

615 (714) ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಾರಾವಾರ ಜಿಲ್ಲೆಯಲ್ಲಿ ಅಂಗನವಾಡಿಗಳಿಗೆ ಪೂರೈಸುತ್ತಿರುವ ಆಹಾರದಲ್ಲಿ ಹುಳಬಿದ್ದ ರಾಗಿ ಹಿಟ್ಟು ಹಾಗೂ ಹೆಸರುಕಾಳುಗಳನ್ನು ಮಕ್ಕಳಿಗೆ ಪೂರೈಸುತ್ತಿದ್ದು, ಇದರಿಂದ ಸಾರ್ವಜನಿಕರು ಆತಂಕ ವ್ಯಕ್ತಪಡಿಸಿದ್ದು, ಈ ರೀತಿ ತೀರಾ ಕಳಪೆ ಮಟ್ಟದ ಆಹಾರ ಪೂರೈಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು)

(ಆ) ಈ ಸಂಬಂಧ ಅಧಿಕಾರಿಗಳು ಆಕ್ಷೇಪಣೆ ಮಾಡದೇ ಇರುವ ಕುರಿತು ಸರ್ಕಾರ ತನಿಖೆ ಮಾಡುವುದೇ; (ವಿವರ ನೀಡುವುದು)

(ಇ) ಜಿಲ್ಲೆಯಲ್ಲಿರುವ ಅಂಗನವಾಡಿಗಳಿಗೆ ಆಹಾರವನ್ನು ಪೂರೈಸುತ್ತಿರುವ ಸಂಸ್ಥೆಗಳು ಅಥವಾ ಗುತ್ತಿಗೆದಾರರ ವಿವರಗಳನ್ನು ತಾಲ್ಲೂಕುವಾರು ನೀಡುವುದು;

(ಈ) ಆಹಾರವನ್ನು ಪೂರೈಸುತ್ತಿರುವ ಸಂಸ್ಥೆಗಳು ಅಥವಾ ಗುತ್ತಿಗೆದಾರರು ಆಹಾರ ಖರೀದಿಸುತ್ತಿರುವ ಆಹಾರ ಸಾಮಾಗ್ರಿಗಳ ಬೆಲೆಗೂ ಹಾಗೂ ಅಂದಿನ ಎ.ಪಿ.ಎಂ.ಸಿ. ಮಾರುಕಟ್ಟೆ ಬೆಲೆಗೂ ವ್ಯತ್ಯಾಸವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಉ) ಹಾಗಿದ್ದಲ್ಲಿ, ಮಾರುಕಟ್ಟೆ ಜಿಲ್ಲೆಗಿಂತ ಕಡಿಮೆ ದರದಲ್ಲಿ ಕಳಪೆ ಆಹಾರ ಸಾಮಗ್ರಿಗಳನ್ನು ಖರೀದಿಸಿ ಪೂರೈಸುತ್ತಿರುವುದರ ಬಗ್ಗೆ ಸಂಬಂಧಿಸಿದ ತಾಲ್ಲೂಕು ಅಧಿಕಾರಿ ಯಾರ ಗಮನಕ್ಕೆ ತರದೇ ಇರುವುದರಿಂದ ಅವರ ಮೇಲೆ ಸರ್ಕಾರ ಕೈಗೊಂಡ ಕ್ರಮಗಳೇನು? (ಮಾಹಿತಿ ನೀಡುವುದು)